ಸಂಸ್ಥಾಪಕರು: ಪ್ರೊ ಎಂ.ವಿ. ಸೀತಾರಾಮಯ್ಯ





# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಸಂಪುಟ: ೦೨ ಸಂಚಿಕೆ: ೦೯ Vol 02 Issue 09 | ಡಿಸೆಂಬರ್ ೨೦೧೫ December 2015 | ಪುಟಗಳು ೮ Pages - 8 | ವಾರ್ಷಿಕ ಚಂದ ರೂ. ೨೦/- A. Sub. - Rs. 20/- | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ Editor : Sri. B.R. Ravindranath



ಚಂದಾ ವಿವರಗಳು

ವಾರ್ಷಿಕ ಚಂದಾ
ರೂ. ೨೦/-
ಐದು ವರ್ಷಗಳ ಚಂದಾ
ರೂ. ೧೦೦/-

ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ:
೨೬೬೧೫೪೮೭೭, ೨೬೬೭೬೭೭೩
ಇಮೇಲ್ : bmsritrust@gmail.com

## ಅಕ್ಕರ ಗೊಟ್ಟಿ' (ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ)

ಅಕ್ಕರಗೊಟ್ಟಿ ಕಾರ್ಯಕ್ರಮ-3 (13-11-2015ಶುಕ್ರವಾರ)

ವಿಷಯ: ವಿಷಯ :'ಕುಮಾರವ್ಯಾಸ ಭಾರತ'ದ ಎರಡು ಪದ್ಯಗಳ ಅರ್ಥಜಿಜ್ಞಾಸೆ

ಚರ್ಚೆಗೆ ಚಾಲನೆ: ಶ್ರೀ ಚಂದ್ರಶೇಖರ (ಪ್ರಿನ್ಸಿಪಾಲರು,
ವಿಜಯ ಸಂಜೆ ಪದವಿಪೂರ್ವ ಕಾಲೇಜು,
ಜಯನಗರ, ಬೆಂಗಳೂರು - 560 011)

(ಕುಮಾರವ್ಯಾಸ ಭಾರತ-ಸಂಧಿ:7,ಪದ್ಯ:16-ಮಾಸ್ತಿ:ಕುವೆಂಪು)

ಪಾಂಡವರು ಅರಣ್ಯ ವಾಸದಲ್ಲಿದ್ದಾಗ ವೇದವ್ಯಾಸರ ಆದೇಶದಂತೆ ಅರ್ಜುನನು ಶಿವಕೃಪೆಯನ್ನು ಪಡೆಯಲು ಇಂದ್ರಕೀಲ ಪರ್ವತಕ್ಕೆ ಹೋಗುತ್ತಾನೆ. ಕಿರಾತ ವೇಷದ ಶಿವನೊಡನೆ ಹೋರಾಡಿ ಪಾಶುಪತವನ್ನು ಪಡೆಯುತ್ತಾನೆ. ಇಂದ್ರನು ತನ್ನ ಮಗನ ಸಾಧನೆಯನ್ನು ಮೆಚ್ಚಿ"ಕೃತ ತಪಸ್ಸಿಂ ಭಿನ್ನಖೇದಕ್ಷತ ಶರೀರ ವ್ಯಥೆಯನಮರಾವತಿಯಲಿ ಕಳೆ"ಎಂದು ಅವನನ್ನು ಅಮರಾವತಿಗೆ ಆಹ್ವಾನಿಸುತ್ತಾನೆ. ಆನಂತರ ಅರ್ಜುನನನ್ನು ಕರೆತರಲು ಸಾರಥಿಯಾದ ಮಾತಲಿಯನ್ನು ಕಳುಹಿಸುತ್ತಾನೆ. ದೇವರಥದಲಿ ಬಂದ ಮಾತಲಿ 'ನೀನಹೈ ಕಲಿಪಾರ್ಥನೆಂಬ ನರೇಶ್ವರನು'ಎನುತ್ತ ಗೌರವದ ಮಾತಾಡುತ್ತಾನೆ.

'ಯಜ್ಞಯಾಗಾದಿಗಳನ್ನು ಮಾಡಿದವರಿಗೂ, ಮಹಾತಪಸ್ವಿಗಳಿಗೂ ಸಿದ್ಧಿಸುವ ಅಮರಾವತಿ ಇಂದು ನಿನ್ನ ವಶವಾಗಿದೆ, ಇಂದು ನಿನ್ನ ಪುಣ್ಯದ್ರುಮ ಫಲಬಿಟ್ಟಿದೆ'ಎಂದು ಹೇಳುತ್ತಾನೆ. ಈ ಮಾತಿಗೆಅರ್ಜುನನ ಪ್ರತಿಕ್ರಿಯೆ ಈ ಭಾಗದಲ್ಲಿದೆ.



"ಬಲ್ಲರಾರದನಶ್ವಮೇಧದ ಮಲ್ಲರನು ಕೃತ ರಾಜಸೂಯರು ಬಲ್ಲರೇ ಕಡೆ ಬೀಡಕೋಟಿಯ ಗುಡಿಯ ಬೊಡ್ಡಿಯರ ಎಲ್ಲಯಮರಾವತಿ ನರಾಧಮರೆಲ್ಲಿ ನಾವೀಶ್ವರನ ಕರುಣದ ಭುಲ್ಲವಣೆಯಲಿ ಭಾಗ್ಯನೆಂದನು ನಗುತ ಕಲಿಪಾರ್ಥಬಲ್ಲರಾರು ಅದನು ಅಶ್ವಮೇಧದ ಮಲ್ಲರನು ಕೃತರಾಜಸೂಯರು ಬಲ್ಲರೇ ಕಡೆ ಬೀಡ ಕೋಟಿಯಗುಡಿಯ ಬೊಡ್ಡಿಯರ ಎಲ್ಲಿಯ ಅಮರಾವತಿ ಎಲ್ಲಿ ನರಾಧಮರು ನಾವು ಈಶ್ವರನ ಕರುಣದ ಭುಲ್ಲವಣೆಯಲಿ ಭಾಗ್ಯನು ಎಂದನು ಕಲಿ ಪಾರ್ಥ"

ನಾನು ಅಮರಾವತಿಗೆ ಹೋಗುವುದನ್ನು ಯಾರು ತಿಳಿದಿದ್ದರು. ...ಪುಟ 5 ರಲ್ಲಿ ಮುಂದುವರಿದಿದೆ.

## ಸಂಪಾದಕೀಯ

ಅಂಚೆ ಇಲಾಖೆಯವರು ಹೊಂಗನಸು ಪತ್ರಿಕೆಗೆ ರಿಯಾಯಿತಿ ಪರವಾನಗಿ ನೀಡಿರುತ್ತಾರೆ. ಇನ್ನು ಮುಂದೆ ಹೊಂಗನಸು ಪತ್ರಿಕೆಯನ್ನು ಪ್ರತಿ ತಿಂಗಳು 30ನೇ ದಿನಾಂಕದಂದು ಅಂಚೆಗೆ ಹಾಕಲಾಗುತ್ತದೆ.ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ನಡೆಸುವ ಕಾರ್ಯಕ್ರಮಗಳ ವಿವರಗಳು ತಿಂಗಳ ಮೊದಲ ವಾರದಲ್ಲಿಯೇ ತಲುಪಿಬಿಡುತ್ತದೆ.ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ನಡೆಸುವ ಕಾರ್ಯಕ್ರಮಗಳಲ್ಲಿ ತಾವೆಲ್ಲರೂ ತಪ್ಪದೆ ಉಪಸ್ಥಿತರಿರಲು ಕೋರುತ್ತೇವೆ.

ಈ ಸಂಚಿಕೆಯಿಂದ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಕಾರ್ಯದರ್ಶಿ ಪ್ರೊ.ಅಬ್ದುಲ್ ಬಶೀರ್ ಅವರು ರಚಿಸಿರುವ ಆಧುನಿಕ ವಚನಗಳನ್ನು ಕಂತುಗಳಲ್ಲಿ ಪ್ರಕಟಿಸುತ್ತೇವೆ.

ಹೊಂಗನಸು ಪತ್ರಿಕೆಯಲ್ಲಿ ಹೆಚ್ಚಿನ ಪುಟಗಳನ್ನ ಸೇರಿಸುವುದಲ್ಲದೆ ವರ್ಣರಂಜಿತವಾಗಿ ಪ್ರಕಟಪಡಿಸುವ ಬಗ್ಗೆ ಚಿಂತನೆಗಳು ನಡೆಯುತ್ತಿವೆ. ನಿಮ್ಮ ಸಲಹೆ ಸೂಚನೆಗಳಿಗೆ ಸ್ವಾಗತ

ಚಂದಾಹಣವನ್ನು ಪಾವತಿಸಿಲ್ಲದವರು ಕೂಡಲೇ ಪಾವತಿಸಬೇಕೆಂದು ಕೋರುತ್ತೇವೆ.

**ಬಿಆರ್ ರವೀಂದ್ರನಾಥ್**
ಸಂಪಾದಕರು

### ಸದಸ್ಯರ ಗಮನಕ್ಕೆ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ಎಲ್ಲಾ ಸದಸ್ಯರ ವಿಳಾಸಗಳನ್ನು ಖಚಿತಪಡಿಸಿಕೊಂಡು ಈ ಮೈಲ್ ವಿಳಾಸ ಹಾಗೂ ಮೊಬೈಲ್ ದೂರವಾಣಿ ಸಂಖ್ಯೆ ಇವುಗಳನ್ನೂ ಒಳಗೊಂಡ ಪರಿಷ್ಕೃತ ವಿಳಾಸ ಮಾಹಿತಿಗಳನ್ನು ಡಿಜಿಟಲೀಕರಿಸುವ ಕೆಲಸವನ್ನು ಪ್ರಾರಂಭ ಮಾಡಿರುತ್ತದೆ. ಇದರಿಂದ ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಹೆಚ್ಚಿನ ದಕ್ಷತೆ ಹಾಗೂ ಮಿತವ್ಯಯ ಸಾಧಿಸಲು ಸಾಧ್ಯವಿರುತ್ತದೆ.ಪ್ರತಿಷ್ಠಾನದ ಎಲ್ಲಾ ಸದಸ್ಯರೂ ತಮ್ಮ ಈ ಮೈಲ್ ವಿಳಾಸ ಹಾಗೂ ಮೊಬೈಲ್ ದೂರವಾಣಿ ಸಂಖ್ಯೆ ಇವುಗಳನ್ನೂ ಒಳಗೊಂಡ ವಿಳಾಸಗಳನ್ನು ಪ್ರತಿಷ್ಠಾನದ ಕಚೇರಿಗೆ ಈ ಕೆಳಕಂಡ ಯಾವುದೇ ರೀತಿಯಲ್ಲಿ ತಲುಪಿಸಬೇಕೆಂದು ಕೋರುತ್ತೇವೆ:

1. ಒಂದು ಪೋಸ್ಟ್ ಕಾರ್ಡ್ ನಲ್ಲಿ ಎಲ್ಲಾ ವಿವರಗಳನ್ನು ಬರೆದು ಕಳುಹಿಸುವುದು
2. ಪ್ರತಿಷ್ಠಾನದ ಈ ಮೈಲ್ ವಿಳಾಸಕ್ಕೆ ಎಲ್ಲಾ ವಿವರಗಳನ್ನು ಕಳುಹಿಸುವುದುಭಟಡುಣಡಿಣಣ@ರಟಚುಟ.ಛಿಂಟ
3. ಪ್ರತಿಷ್ಠಾನದ ಕಚೇರಿಗೆ ದೂರವಾಣಿ ಕರೆ ಮಾಡಿ ವಿವರಗಳನ್ನು ನೀಡುವುದು 080 26615877
4. ಪ್ರತಿಷ್ಠಾನದ ಕಚೇರಿಗೆ ಭೇಟಿ ನೀಡಿದಾಗ ವಿವರಗಳನ್ನು ನೀಡುವುದು.

## ಹಸ್ತಪ್ರತಿ ಸಂಗ್ರಹಾಲಯಕ್ಕೆ ಸ್ನಾತಕೋತ್ತರ ವಿದ್ಯಾರ್ಥಿಗಳ ಭೇಟಿ

ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ವಿಜಯನಗರ ಬೆಂಗಳೂರು ಕನ್ನಡ ಸ್ನಾತಕೋತ್ತರ ಮತ್ತು ಸಂಶೋಧನ ಕೇಂದ್ರದ ವತಿಯಿಂದ ದ್ವಿತೀಯ ಎಂ.ಎ.ಆಕರ ಶಾಸ್ತ್ರ ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಾತ್ಯಕ್ಷಿಕೆ ತರಗತಿಯ ನಿಮಿತ್ತ, ಆರು ವಿದ್ಯಾರ್ಥಿಗಳ ತಂಡವು, ಡಾ॥ ಎನ್.ಆರ್.ಲಲಿತಾಂಬ, ಸಹ ಪ್ರಾಧ್ಯಾಪಕರ ನೇತೃತ್ವದಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನದ ತಿಮ್ಮಪ್ಪದಾಸ ಪ್ರಾಚೀನ ಹಸ್ತಪ್ರತಿ ಸಂಗ್ರಹಾಲಯಕ್ಕೆ ಒಂದು ದಿನದ ಭೇಟಿಯನ್ನು ಆಯೋಜಿಸಲಾಗಿತ್ತು. ಹಸ್ತಪ್ರತಿ ಶಾಸ್ತ್ರದ ಸಂಗ್ರಹ ಸಂರಕ್ಷಣೆ, ಸಂಸ್ಕರಣೆ, ಸೂಚಿ ತಯಾರಿಕೆಯವರೆಗಿನ ವಿವಿಧ ಘಟ್ಟಗಳು ಮತ್ತು ಆಧುನಿಕ ಸೌಲಭ್ಯಗಳಾದ ಡಿಜಿಟಲೈಷನ್, ಇಮೇಜಿಂಗ್, ಕ್ರಾಪಿಂಗ್‌ಗಳ ಬಗ್ಗೆಯೂ ವಿದ್ಯಾರ್ಥಿಗಳಿಗೆ ಮಾಹಿತಿ ನೀಡಲಾಯಿತು. ನಮ್ಮ ಸಂಗ್ರಹಾಲಯದಲ್ಲಿನ ಲೇಖನ ಸಾಮಗ್ರಿಗಳು, ಕಡತಗಳು.ಎರಡು ಬಗೆಯ ವಿಶಿಷ್ಟಗ್ರಂಥಗಳು, ಭೂರ್ಜಪತ್ರ, ಕೋರಿಕಾಗದದ ಪ್ರತಿಗಳು, ಮುಂತಾದವುಗಳನ್ನು ಬಹಳ ಆಸಕ್ತಿಯಿಂದ ವೀಕ್ಷಿಸಿದರು.ಡಾ॥ಲಲಿತಾಂಬರವರೂ ಸಹ ಉಪಯುಕ್ತ ಮಾಹಿತಿಗಳನ್ನು ಮತ್ತು ವಿಷಯಗಳನ್ನು ವಿದ್ಯಾರ್ಥಿಗಳಿಗೆ ತಿಳಿಸಿಕೊಟ್ಟರು.

ಹಸ್ತಪ್ರತಿ ವಿಭಾಗದ ಸಂರಕ್ಷಕರು ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ಭೇಟಿಯನ್ನು ಸಂಯೋಜಿಸಿ ಯಶಸ್ವಿಯಾಗಿ ನಡೆಸಿಕೊಟ್ಟರು.

### ಬಿಎಂಶ್ರೀ ಕಲಾ ಭವನ

150 ಜನರಿಗೆ ಸ್ಥಳಾವಕಾಶ ಧ್ವನಿ, ಬೆಳಕು, ಪ್ರೊಜೆಕ್ಟರ್ ಸೌಲಭ್ಯಗಳು ಇರುವ ಬಿಎಂಶ್ರೀ ಕಲಾ ಭವನ ಸಾಹಿತ್ಯ – ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಲಭ್ಯವಿದೆ.ಉಪನ್ಯಾಸ, ವಿಚಾರಗೋಷ್ಠಿ, ಪುಸ್ತಕ ಬಿಡುಗಡೆ, ಕವಿಗೋಷ್ಠಿ, ಸಭೆ, ಸಂವಾದ, ಸಂಗೀತ, ನೃತ್ಯ, ಮುಂತಾದ ವೈವಿಧ್ಯಮಯ ಕಾರ್ಯಕ್ರಮಗಳಿಗೆ ಸಾಹಿತ್ಯಾಸಕ್ತರು, ಸಂಘ ಸಂಸ್ಥೆಗಳು ಪಡೆಯಬಹುದು. ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಿ.

**ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣwww.bmshri.org**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣವನ್ನು ಪುನರ್ ರೂಪಿಸಲಾಗಿರುತ್ತದೆ.ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಜಾಲತಾಣ ವಿಶ್ವದಾದ್ಯಂತ ಕನ್ನಡ ಅಧ್ಯಯನ ಮಾಡುವ ಎಲ್ಲರಿಗೂ ಉತ್ತಮ ಸಂಪನ್ಮೂಲಗಳ ಕಣಜವಾಗಿರುವಂತೆ ಮಾಡಲು ವಿಶೇಷ ಶ್ರಮ ವಹಿಸಲಾಗುತ್ತಿದೆ. ಶೀಘ್ರದಲ್ಲಿ ಹಲವಾರು ನೂತನ ಶೈಲಿಯ ಸೌಲಭ್ಯಗಳನ್ನು ಈ ಜಾಲತಾಣದಲ್ಲಿ ಕಾಣಬಹುದು. ನಿಮ್ಮ ಸಲಹೆ ಸೂಚನೆಗಳಿಗೆ ಸ್ವಾಗತ.

# ಡಿಸೆಂಬರ್ 2015ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು



**4-12- 2015 ಶುಕ್ರವಾರ ಸಂಜೆ : 6.00 ಸಂಜೆ**

ಕನ್ನಡ ಸಂಸ್ಕೃತಿ ದರ್ಶನ

ಸಾಕ್ಷ್ಯ ಚಿತ್ರ ಪ್ರದರ್ಶನ 'ಭಾಷಾ ಏಕೀಕರಣ' (1-2)



**11-12- 2015 ಶುಕ್ರವಾರ ಸಂಜೆ 6.00 ಗಂಟೆ**

**ಅಕ್ಕರಗೊಟ್ಟಿ**

**ಪಂಪಭಾರತದ ಒಂದು ಪದ್ಯ - ಗದ್ಯಭಾಗ**

**ಚಾಲನೆ : ಡಾ॥ನಳಿನೀ ವೆಂಕಟೇಶ್**

(ಪದ್ಯವನ್ನು ಪುಟ 4ರಲ್ಲಿ ಮುದ್ರಿಸಲಾಗಿದೆ)



**15-12-15 ಮಂಗಳವಾರ ಸಂಜೆ 6.00 ಕ್ಕೆ**

ವಚನ ವಿಹಾರ

**(ಸಂಗೀತಾತ್ಮಕ ಸಾಕ್ಷ್ಯಚಿತ್ರ ಪ್ರದರ್ಶನ)**

**21-12-15 ಸೋಮವಾರ ಸಂಜೆ 6.00ಗಂಟೆ**

ಎಂ. ಎ ರಾಮಾನುಜಯ್ಯಂಗಾರ್ ದತ್ತಿಕಾರ್ಯಕ್ರಮ - ಉಪನ್ಯಾಸ

ಡಾ॥ ಕೆಳದಿ ವೆಂಕಟೇಶ ಜೋಯಿಸ್

(ಕ್ಯೂರೇಟರ್, ಕೆಳದಿ ಮ್ಯೂಸಿಯಂ)

**ವಿಷಯ : ಹಸ್ತಪ್ರತಿಗಳ ಪಾರಂಪರಿಕ ರಕ್ಷಣೆ**



**25-12-2015 ಶುಕ್ರವಾರ ಬೆಳಿಗ್ಗೆ 10.30 ಗಂಟೆ**

ಪ್ರಶಸ್ತಿ ಪ್ರದಾನ ಕಾರ್ಯಕ್ರಮ

('ಶಾ' ಬಾಲೂರಾವ್ ಅನುವಾದ ಪ್ರಶಸ್ತಿ' ಮತ್ತು

'ಶಾ'ಬಾಲುರಾವ್ ಯುವಬರಹಗಾರ ಪ್ರಶಸ್ತಿ'

ಮುಖ್ಯ ಅತಿಥಿಗಳು : ಡಾ. ಸಿ.ಎನ್. ರಾಮಚಂದ್ರನ್
(ಪ್ರಸಿದ್ಧ ವಿಮರ್ಶಕರು ,ಲೇಖಕರು)

## 'ಅಕ್ಕರಗೊಟ್ಟಿ ಕಾರ್ಯಕ್ರಮ

**(11-12-2015 ನೇ ಶುಕ್ರವಾರ ಸಂಜೆ 6.00ಗಂಟೆ ಚಾಲನೆ : ಡಾ॥ ನಳಿನಿ ವೆಂಕಟೇಶ್)**

ಪಂಪಭಾರತದ 13ನೇ ಆಶ್ವಾಸದ ಪದ್ಯ- 7ಎ ಮತ್ತು ಮುಂದಿನ ಗದ್ಯಭಾಗಗಳ ಅರ್ಥಜಿಜ್ಞಾಸೆ

ಕ್ರಂದತ್ಸ್ಯಂದನ ಜಾತ ನಿರ್ಗತ ಶಿಖಿ ಜ್ವಾಳಾ ಸಹಸ್ರಂಗಳಾ

ಟಂದೆತ್ತಂ ಕವಿದಟ್ಟೆ ಜೀವ ಶವ ಸಂಘಾತಂಗಳಂ ಚಕ್ಕು ಮೊ

ಕ್ಕೆಂದಾಗಳ್ ಕಡಿದುಗ್ರ ಭೂತ ನಿಕರಂ ಕೆಯ್ ಬೇಯೆ ಬಾಯ್ ಬೇಯೆ ತಿಂ

ಬಂದ ತನ್ನ ಮನಕ್ಕಗುರ್ವಿಸುವಿನಂ ದುರ್ಯೋಧನಂ ನೋಡಿದಂ (13-71)

ವ॥ ನೋಡಿ ಕನಲ್ವ ಕೆಂಡದ ಮೇಲೆ ಪಟಿಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ

ಬೆಳ್ಳುಳ್ಳಿಯ ಕಂಪಿನಂತೆ ಬಳ್ಳುವಿನ ಬಾಯೊಳಳುರ್ವ ಕೆಂಡಂಗಳೊಳ್ ಸುಟೆದು

ಬೇವ ಪೆಣಂಗಳ ಕಂಪು ನಾಱುವುದರ್ಕೆ ಸೈರಿಸಲಾಱದೆ ಕೋಳ್ದಾಂಟಿನೊಳ್

ಕೊಳುಗುಳವಂ ಕಟೆದು ಪೋಗಿ ವಿಳಯ ಕಾಳ ವಿಘಟ್ಟಿತಾಷ್ಟ ದಿಗ್ಭಾಗ ಸಂಧಿ

ಬಂಧನ ಗಗನ ತಳಮೆ ಧರಾತಳಕ್ಕೆ ಪಜೆದು ಬಿಟ್ಟಂತಾನುಮಾದಿ ವರಾಹಂಸಮುದ್ರ

ಮುದ್ರಿತ ಧರಾಮಂಡಳಮಂ( ರಸಾತಳದಿಂದೆತ್ತಿ ಬಂದುದು ನಭೋ) ಮಂಡಳ ಸ್ಥಾನಮ

ಸಲಿಲ ಪರಿಪೂರಿತಮಾದಂತಾನಮಾಗಿ ( 13-71ವ)

**ಇದು ಪಾತಾಳಬಿಲಕ್ಕೆ ಬಾಗಿಲ್**

---

## ಆಧುನಿಕ ವಚನಗಳು

**-ಜಿ. ಅಬ್ದುಲ್ ಬಷೀರ್**

ಬಸವ ಬಸವಾ ಎಂದರೆ ಬಂಧು
ಬಸವ ಬಸವಾ ಎಂದರೆ ಪಿತ
ಬಸವ ಬಸವಾ ಎಂದರೆ ಮಾತೆ
ಬಸವ ಬಸವಾ ಎಂದರೆ ಗುರು
ಬಸವ ಬಸವಾ ಎಂದರೆ ಸಕಲ ಜಪತಪಂಗಳಯ್ಯಾ!
ಬಸವ ಬಸವಾ ಎಂದರೆ ಪ್ರೀತಿ- ದಯೆ-ಔದಾರ್ಯ- ವಿಶ್ವಾಸ
ಭರವಸೆಯಲ್ಲದೆ ಬೇರೆಯಲ್ಲವಯ್ಯಾ!
ಬಸವ ಬಸವಾ ಎಂದರೆ ಶಿವನಲ್ಲದೆ ಅನ್ನಲ್ಲಯ್ಯಾ!
ಇಂಥ ಬಸವಂದಿರ ಸಹಸ್ರ ಸಹಸ್ರ ಕಾಣುವಂತೆ ಮಾಡು
'ಅಲ್ಲಾರಖಾ' ನಿನ್ನ ಧರ್ಮ. ॥1॥

# ಕವಿ ಗೋಷ್ಠಿಯ ಕವನಗಳು

ಕವಿ ಗೋಷ್ಠಿಯಲ್ಲಿ ವಾಚನ ಮಾಡಿದ ಕವನಗಳನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಲ್ಲಾ ಸದಸ್ಯರಿಗೂ ತಲುಪಿಸುವ ಉದ್ದೇಶದಿಂದ ಹೊಂಗನಸು ಪತ್ರಿಕೆಯಲ್ಲಿ ಸ್ಥಳಾವಕಾಶ ಆದ್ಯತೆ ಮೇರೆಗೆ ಪ್ರತಿ ತಿಂಗಳೂ ಆಯ್ದ ಕವನಗಳನ್ನು ಪ್ರಕಟಿಸಲಾಗುವುದು. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸದಸ್ಯರಾದ ಶ್ರೀ ರಾಜೇಂದ್ರಪ್ರಸಾದ್ ಅವರು ರಚಿಸಿದ ಕವನವನ್ನು ಈ ಕೆಳಗೆ ನೀಡಲಾಗಿದೆ:

## ಹಿರಿಯಣ್ಣ

ನಿಮಗಾಗಿ ನಾನೆಂದು ಬಳಿಬಂದ ಹಿರಿಯಣ್ಣ
ಅರಿವಾಗದಂತೆ ಅಡಿಗಡಿಗೆ ತಿನಿಸಿಬಿಟ್ಟ ಬಿಳಿಸುಣ್ಣ
ದೇವರಿತ್ತ ಕಾಮಧೇನುವೆಂದು ಗಣಕಯಂತ್ರ ಕೈಯಲಿಟ್ಟ
ಮಗ್ಗಿಕಲಿತು ಗುಣಿಸುವುದನು ಪೂರ್ತಿಯಾಗಿ ಮರೆಸಿಬಿಟ್ಟ
ನಮ್ಮ ಜನರ ಬುದ್ಧಿಬಲವ ಜಾಣತನದಿ ಬಳಸಿಕೊಂಡ
ಎಣಿಸಲಾರದಷ್ಟು ಹಣವ ಬೊಕ್ಕಸಕ್ಕೆ ತುಂಬಿಕೊಂಡ
ನಮ್ಮ ಜನರ ಕಿಸೆಯತುಂಬಾ ರೂಪಾಯಿಗಳನು ತುಂಬಿಬಿಟ್ಟ
ಹಣದಮತ್ತಿನಲ್ಲಿ ಭಾರತೀಯ ತನ್ನ ತನವ ಮರೆತುಬಿಟ್ಟ
ಪಕ್ಕದೂರ ಕಾಣದವನು ಅಮೇರಿಕಾದ ರಂಗಿನಲ್ಲಿ ಮುಳುಗಿಬಿಟ್ಟ
ರಾಗಿಮುದ್ದೆ ನುಂಗುವವನು ಪಿಜ್ಜ ಬರ್ಗರ್ ಕೋಲ ಚಟುವ ಕಲಿತುಬಿಟ್ಟ
ನಮ್ಮ ವೇದ ಯೋಗ ರಾಗಗಳನು
ಅಮದುಮಾಡಿಕೊಂಡುಬಿಟ್ಟ
ಮಲ್ಬಿಜಿಮ್ಮು ರಾಕು ಬ್ರೇಕು ಸಂಸ್ಕೃತಿಯ ಭಾರತಕ್ಕೆ ತಂದುಬಿಟ್ಟ
ಕರುಳಕುಡಿಗಳನ್ನು ಅಪ್ಪ ಅಮ್ಮನಿಂದ ಕಿಸಿದು ಅಮೇರಿಕಾದಲ್ಲಿ ಬಂದಿಸಿಟ್ಟ
ಓಂಟಿತನದ ಬೇಗೆಯಲ್ಲಿ ಅವರ ಬದುಕ ನಿತ್ಯನರಕ ಮಾಡಿಬಿಟ್ಟ
ಅಪ್ಪ ಅಮ್ಮ ಅಣ್ಣ ತಂಗಿ ಬೆಸುಗೆಗಳನು ಬಿಡಿಸಿಬಿಟ್ಟ
ಓಂದೆಬಳ್ಳಿ ಹೂಗಳಂತೆ ನಲಿಯುತ್ತಿದ್ದ ಜೀವಿಗಳನು
ಅಮೀಬಗಳಾಗಿ ಮಾಡಿಬಿಟ್ಟ
ಅಮೇರಿಕಾದ ಗೊಬ್ಬರಕ್ಕೆ ಒಗ್ಗಿಕೊಂಡು ಭಾರತೀಯ
ಮೃಷ್ಟಾನ್ನ ಸವಿಯ ಮರೆತುಬಿಟ್ಟ
ಹಿರಿಯಣ್ಣನಾಟ ಅರಿಯುವಷ್ಟರಲ್ಲಿ ಅವನು ಸಂಪೂರ್ಣವಾಗಿ ಕೆಟ್ಟ

## ಪ್ರೊ.ಸೂರ್ಯನಾಥ್ ಯು. ಕಾಮತ್

26-04-1937-21-10-15



ಶ್ರೇಷ್ಠ ಇತಿಹಾಸ ತಜ್ಞ, ಖ್ಯಾತ ಸಂಶೋಧಕ ಪ್ರೊ. ಸೂರ್ಯನಾಥ್ ಯು.ಕಾಮತ್ ರವರು ದಿನಾಂಕ 21-10-15ರಂದು ಬೆಂಗಳೂರಿನಲ್ಲಿ ನಿಧನರಾದರು. ಕರ್ನಾಟಕ ಇತಿಹಾಸ ಅಕಾದೆಮಿಯ ಸಂಸ್ಥಾಪಕ ಸದಸ್ಯರಲ್ಲಿ ಒಬ್ಬರಾಗಿದ್ದರು. ಇತಿಹಾಸ ಅಕಾದೆಮಿ ಪ್ರಾರಂಭವಾಗಿ ಇಂದಿಗೆ 29 ವರ್ಷಗಳು ಕಳೆದಿದೆ. ಕರ್ನಾಟಕ ರಾಜ್ಯ ಪತ್ರಾಗಾರ(ಗೆಜೆಟಿಯರ್) ಇಲಾಖೆಯ ನಿರ್ದೇಶಕರಾಗಿಯೂ ಕಾರ್‍ಯನಿರ್ವಹಿಸಿದ್ದರು. ಮಿಥಿಕ್ ಸೊಸೈಟಿನಲ್ಲೂ ಸಹ ಬಹಳ ದೀರ್ಘಕಾಲ ಸೇವೆ ಸಲ್ಲಿಸಿದ್ದರು.ದೇಶ ಕಂಡ ಒಬ್ಬ ಮಹಾನ್ ಜನಸಾಮಾನ್ಯರ ಇತಿಹಾಸಕಾರ ಸೂರ್ಯನಾಥ್ ಕಾಮತ್‌ರ ನಿಧನದಿಂದ ತುಂಬಲಾರದ ನಷ್ಟವಾಗಿದೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನು ಸ್ವೀಕರಿಸಿದ್ದರು.ಅವರಿಗೆ 78 ವರ್ಷ ವಯಸ್ಸಾಗಿತ್ತು.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಅವರಿಗೆ ಶ್ರದ್ಧಾಂಜಲಿ ಅರ್ಪಿಸುತ್ತದೆ

## ಎಚ್.ಎಸ್. ಪಾರ್ವತಿ



ಕನ್ನಡ ಸಾಹಿತ್ಯ ಲೋಕದ ಬಹುಮುಖ ಪ್ರತಿಭೆ, ಆಕಾಶವಾಣಿಯ ಕಾರ್ಯ ನಿರ್ವಾಹಕಿಯಾಗಿದ್ದ ಎಚ್ ಎಸ್ ಪಾರ್ವತಿ ಅವರು ನಿಧನರಾಗಿದ್ದಾರೆ. ಅವರಿಗೆ 81 ವರ್ಷ ವಯಸ್ಸಾಗಿತ್ತು.ಪಾರ್ವತಿ ಅವರು ಲೇಖಕಿ, ಅನುವಾದಕಿಯಾಗಿ ಕನ್ನಡ ಸಾಹಿತ್ಯ ಲೋಕದಲ್ಲಿ ಬೆಳೆದವರು.ಕರ್ನಾಟಕ ಲೇಖಕಿಯರ ಸಂಘದ ಸ್ಥಾಪಕ ಅಧ್ಯಕ್ಷೆಯಾಗಿದ್ದರು.ಇವರ ಅನೇಕ ಕಥೆಗಳನ್ನು ವಾರ್ತಾ ಮತ್ತು ಪ್ರಸಾರ ಇಲಾಖೆ ಸಾಕ್ಷ್ಯಚಿತ್ರ ರೂಪದಲ್ಲಿ ಹೊರತಂದಿದೆ.ಇವರಿಗೆ ಉತ್ತರಪ್ರದೇಶ ಸರ್ಕಾರದಿಂದ ಸಾಹಿತ್ಯ ಸೌಹಾರ್ದ ಪ್ರಶಸ್ತಿ.ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ.ಕರ್ನಾಟಕ ನಾಟಕ ಅಕಾಡೆಮಿ ಫೆಲೋಶಿಪ್. ಕರ್ನಾಟಕ ಅನುವಾದ ಅಕಾಡೆಮಿ ಪ್ರಶಸ್ತಿ, ಕನ್ನಡ ರಾಜ್ಯೋತ್ಸವ ಪ್ರಶಸ್ತಿ ಹಾಗೂ ಹಲವಾರು ಇತರ ಪ್ರಶಸ್ತಿಗಳು ಲಭಿಸಿವೆ.

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಅವರಿಗೆ ಶ್ರದ್ಧಾಂಜಲಿ ಅರ್ಪಿಸುತ್ತದೆ

---

ಮೊದಲನೇ ಪುಟದಿಂದ

ಅಶ್ವಮೇಧ ಮಾಡುವ ಮಹಾನ್ ಮಲ್ಲರಿಗೆ ಲಭ್ಯವಿರುವ ಅವಕಾಶ ಈವರೆಗೆ ರಾಜಸೂಯಯಾಗ ಮಾಡಿದಂಥ ನಮಗೆಲ್ಲಿದೆ.ರಾಜಸೂಯಯಾಗ ಮಾಡಿದ ನಮ್ಮಂಥವರು ಊರಿನ ಕಡೆಬೀಡಿನ ಕೋಟೆಯಗುಡಿ ಬೊಡ್ಡಿಯರನ್ನಾದರೂ ತಿಳಿದಿದ್ದೇವೆಯೆ? ಅಮರಾವತಿ ಎಲ್ಲಿ? ನರಾಧಮರಾದ ನಾವೆಲ್ಲಿ? ಈಶ್ವರನ ಕೃಪೆಯಿಂದ ಅಮರಾವತಿಗೆ ಹೋಗುವ ಭಾಗ್ಯ ನನ್ನದಾಯಿತು. ಎಂದು ಕಲಿಪಾರ್ಥನು ನಗುತ್ತ ಹೇಳುತ್ತಾನೆ.

ಈ ಸಂದರ್ಭದಲ್ಲಿ ಅರ್ಜುನ ಅಮರಾವತಿ ಎಂಥವರಿಗೆ ಮಾತ್ರ ಲಭ್ಯ, ಹಾಗು ತನಗೆ ಅಲ್ಲಿಗೆ ಹೋಗುವ ಅವಕಾಶ ಹೇಗೆ ಸಿಕ್ಕಿತು ಎಂಬುದನ್ನು ಇಲ್ಲಿ ಹೇಳುತಿದ್ದಾನೆ. ಅಶ್ವಮೇಧ ರಾಜಸೂಯಕ್ಕಿಂತ ದೊಡ್ಡಯಾಗ, ಪಾಂಡವರು ಈಗಾಗಲೆ ಮಾಡಿರುವದು ರಾಜಸೂಯವನ್ನು, ಮಾತಲಿ ಅಮರಾವತಿ ಪ್ರವೇಶದ ಅದೃಷ್ಟ ಅರ್ಜುನನಗೆ ಒಲಿದು ಬಂದದ್ದನ್ನು ಹೇಳಿದಾಗ ಅರ್ಜುನ ಈ ರೀತಿ ಹೇಳಿದ್ದಾನೆ.ಇಲ್ಲಿ ಅಮರಾವತಿ ಪ್ರವೇಶ ಸಾಮಾನ್ಯಜನರಿಗೆ ಕಷ್ಟ ಎಂಬುದನ್ನುಹೇಳುತ್ತಿದ್ದಾನೆ.ಅಶ್ವಮೇಧದ ಮಲ್ಲರುಎಂದು ಹೇಳುತ್ತ ಅದು ದೊಡ್ಡಯಜ್ಞ ಎಂದು ಸೂಚಿಸಿ ಅವರಿಗೆ ಸ್ವರ್ಗಪ್ರವೇಶ ಸಾಧ್ಯ ರಾಜಸೂಯ ಮಾಡಿದವರಿಗೆ ಆ ಭಾಗ್ಯವೆಲ್ಲಿ ಎಂದಿದ್ದಾನೆ. ಇಲ್ಲಿ'ಬಲ್ಲರೇ ಕಡೆಬೀಡಕೋಟೆಯ ಗುಡಿಯ ಬೊಡ್ಡಿಯರ'ಎಂದು ಹೇಳಿರುವುದು ಕೇವಲ ರೂಢಿಯ ಮಾತಾಗಿದೆ. ಜೊತೆಗೆ ಪಾರ್ಥನು ನಗುತ್ತ ಈ ಮಾತನ್ನು ಹೇಳುತ್ತಿರುವುದು.

ಅರ್ಜುನ ದೇವಲೋಕಕ್ಕೆ ಹೋಗುತ್ತಿರುವುದು ಸಶರೀರನಾಗಿ, ಮನುಷ್ಯನಾಗಿ. ಸಾವಿನ ನಂತರ ಪುಣ್ಯಫಲದಿಂದ ದೈವತ್ವ ಪಡೆದಲ್ಲ. ದೇವಲೋಕದ ಬೊಡ್ಡಿಯರನ್ನು ನೋಡಲಿಕ್ಕೂ ಅಲ್ಲ. ಅವನು ಇಂದ್ರಕೀಲಕ್ಕೆ ಬರುವಾಗಲೇ ಧರ್ಮರಾಯನು" ಸೋಲದಿರು ಸುರಸತಿಯರಿಗೆ, ಸಮ್ಮೇಳವಾಗದಿರು ಅವರೊಡನೆ, ಕೈ ಮೇಳವಿಸುವುದು ಕಾಮವೈರಿಯ ಚರಣಕಮಲದಲಿ" ಎಂದಿದ್ದಾನೆ. ಹೋದೆಡೆಯಲ್ಲೆಲ್ಲ ಕಟ್ಟಿಕೊಂಡು ಬರುವ ಅರ್ಜುನನ ಗುಣ ಗೊತ್ತಿದ್ದೇ ಈ ಮಾತನ್ನು ಅಣ್ಣನಾದವನು ಈ ಮಾತನ್ನು ಹೇಳಿದ್ದಿರಬಹುದು. ದ್ರೌಪದಿಯೂ ಸಹ 'ನೆನೆಯದಿರು ತನುಸುಖವ'ಎಂದು ಹೇಳಿಕಳುಹಿಸಿದ್ದಾಳೆ. ಆದ್ದರಿಂದ ಕಡೆಬೀಡ ಕೋಟೆಯ ಗುಡಿಯ ಬೊಡ್ಡಿಯರೂ ನಮಗೆ ಲಭ್ಯವಾಗಿಲ್ಲ ಎಂಬ ಸಂಕಟ ಅವನಿಗೇನು ಇಲ್ಲ.ಮಾತಲಿಯ ಬಳಿ ಲಘುವಾಗಿ ಈಮಾತನ್ನು ಹೇಳುತ್ತಿದ್ದಾನೆ ಅಷ್ಟೆ. ಈ ಬಗ್ಗೆಯ ಚರ್ಚೆಯು ತುಂಬ ಉಪಯುಕ್ತವಾಗಿ ಚಿಂತನೆಗಳ ಕಡೆತದಿಂದ ಹೊಸ ಆಲೋಚನೆಗಳಿಗೆ ಎಡೆಗೊಟ್ಟಿತು. ಚರ್ಚೆಯಲ್ಲಿ ಪ್ರೊ.ಅಶ್ವಥನಾರಾಯಣ, ಶ್ರೀ.ಟಿ. ಆರ್. ಅನಂತರಾಮು, ಡಾ. ನಳಿನ ವೆಂಕಟೇಶ್, ಡಾ.ಜಯಮ್ಮ ಕರಿಯಣ್ಣ, ಡಾ.ಪಿ.ವಿ. ನಾರಾಯಣ, ಪ್ರೊ.ಅಬ್ದುಲ್ ಬಶೀರ್, ಶ್ರೀ ಗುರುಪ್ರಸಾದ್, ಶ್ರೀ ವೆಂಕಟರಮಣಯ್ಯ, ರವೀಂದ್ರನಾಥ್ ಮುಂತಾದವರು ಪಾಲ್ಗೊಂಡು ಕಾರ್ಯಕ್ರಮ ಯಶಸ್ವಿಯಾಗಲು ಸಹಕರಿಸಿದರು.

## ವಚನ ವಿಹಾರ

**ಸಂಗೀತಾತ್ಮಕ ಚಿತ್ರಗಳ ಪ್ರದರ್ಶನ**

ಸೋಮವಾರ 23-11-2015 ರಂದು ಸಂಜೆ ಆರು ಗಂಟೆಗೆ ವಚನ ವಿಹಾರ – ವಚನಗಳ ಗಾಯನ ಮತ್ತು ವ್ಯಾಖ್ಯಾನಗಳನ್ನು ಒಳಗೊಂಡಿರುವ ವಿಡಿಯೋ ಚಿತ್ರಗಳ ಪ್ರದರ್ಶನ ನಡೆಯಿತು.ಸುಮಾರು ಒಂದು ಗಂಟೆಯ ಈ ಸಂಗೀತಮಯ ಕಾರ್ಯಕ್ರಮದಲ್ಲಿ ವಚನ ಚಳುವಳಿ, ಬಸವಣ್ಣ ಅವರ ಪಾತ್ರದ ಬಗ್ಗೆ ಬಹಳ ರಸವತ್ತಾಗಿ ವಿವರಿಸಲಾಗಿದ್ದು ಜೊತೆಗೆ ವಚನಗಳನ್ನು ಪ್ರಸಿದ್ಧ ಗಾಯಕರು ಇಂಪಾಗಿ ಹಾಡಿರುವ ಭಾಗಗಳೂ ಇದ್ದು ಅಧಿಕ ಸಂಖ್ಯೆಯಲ್ಲಿ ಹಾಜರಿದ್ದ ಸಭಿಕರಿಗೆ ಹೊಸ ಅನುಭವವನ್ನು ತಂದುಕೊಟ್ಟಿತು.

**ದಿನಾಂಕ : 26-11-2015 ಗುರುವಾರ ಸಂಜೆ 6ಕ್ಕೆ**

ತೀ.ನಂ.ಶ್ರೀ. ಸ್ಮಾರಕ ವಿಶೇಷ ಉಪನ್ಯಾಸ

ವಿಷಯ: " ಸಂಸ್ಕೃತ ನಾಟಕಗಳ ವಿಮರ್ಶೆ – ತೀ.ನಂ.ಶ್ರೀ. ಅವರ ದೃಷ್ಟಿ "

ಅಧ್ಯಕ್ಷತೆ : ಡಾ. ಜೆ.ಶ್ರೀನಿವಾಸ ಮೂರ್ತಿ

ಸುಪ್ರಸಿದ್ಧ ವಿಮರ್ಶಕರು ಹಾಗೂ ರಂಗ ಕರ್ಮಿಗಳು

ಉಪನ್ಯಾಸಕರು : ಡಾ. ಬಿ.ಎನ್.ಸುಮಿತ್ರಾಬಾಯಿ, ಸುಪ್ರಸಿದ್ಧ ವಿಮರ್ಶಕರು

**28-11-2015 ಶನಿವಾರ ಸಂಜೆ 6.ಕ್ಕೆ ಸರ್.ಸಿ.ವಿ ರಾಮನ್ ಸ್ಮಾರಕ ಉಪನ್ಯಾಸ**

ಉಪನ್ಯಾಸಕರು : ಡಾ. ಹಾಲ್ದೊಡ್ಡೇರಿ ಸುಧೀಂದ್ರ

ವಿಷಯ : ರಾಮನ್ ಬಿತ್ತಿದ ಬೀಜಗಳು– ನಿರಂತರ ಫಲ ನೀಡುವ ಹೆಮ್ಮರಗಳಾದ ಕಥೆ

**ಈ ಎರಡೂ ಕಾರ್ಯಕ್ರಮಗಳ ವರದಿಯನ್ನು ಡಿಸೆಂಬರ್ 2015 ರ ಸಂಚಿಕೆಯಲ್ಲಿ ನೀಡಲಾಗುವುದು**

---

# ಶಾಶ್ವತ ನಿಧಿ

## ಸಾಹಿತ್ಯಾಸಕ್ತರಲ್ಲಿ ಒಂದು ಬಿನ್ನಹ

ಪ್ರತಿಷ್ಠಾನದ ಮುಂದೆ ಹಸ್ತಪ್ರತಿಗಳ ರಕ್ಷಣೆ, ಡಿಜಿಟೀಕರಣ ಮತ್ತು ಅಧ್ಯಯನ, ಮಾಧ್ಯಮ ಕನ್ನಡ ಬರವಣಿಗೆಯ ಬಗೆಗಿನ ಸ್ನಾತಕೋತ್ತರ ಡಿಪ್ಲೊಮ ತರಗತಿಗಳನ್ನು ನಡೆಸುವುದು, ನಮ್ಮ ಹಿರಿಯ ಸಂಶೋಧಕರ ಬಗ್ಗೆ ಸಾಕ್ಷ್ಯಚಿತ್ರಗಳನ್ನು ತಯಾರಿಸುವ ಯೋಜನೆ, ಮೌಲಿಕ ಪುಸ್ತಕಗಳ ಪ್ರಕಟಣೆ, ಹಳಗನ್ನಡದ ವಿಶೇಷ ಅಧ್ಯಯನಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವುದು ಇಂತಹ ಹಲವಾರು ಯೋಜನೆಗಳು ಮುಂದಿವೆ. ಇವಕ್ಕೆಲ್ಲ ಹಣದ ಆವಶ್ಯಕತೆ ಇದೆ.

ಈ ದಿಸೆಯಲ್ಲಿ ಪ್ರತಿಷ್ಠಾನವು ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸುವ ಆಲೋಚನೆಯಲ್ಲಿದೆ.ಈ ನಿಧಿಯ ಮೇಲಿನ ಬಡ್ಡಿ ಹಣದಿಂದ ನಮ್ಮ ಮುಂದಿನ ಯೋಜನೆಗಳನ್ನು ಕಾರ್ಯಗತಗೊಳಿಸುವುದು ನಮ್ಮ ಉದ್ದೇಶವಾಗಿರುತ್ತದೆ.ನಮ್ಮ ಉದ್ದೇಶ ಸಾಕಾರಗೊಳ್ಳಲು ತಮ್ಮಂತಹ ಉದಾರಿಗಳ ನೆರವು ಅಗತ್ಯ

ತಮ್ಮಲ್ಲಿ ವಿಶೇಷವಾಗಿ ಮಾಡುವ ಮನವಿಯೆಂದರೆ, ತಾವು ಉದಾರವಾಗಿ ದಾನದ ರೂಪದಲ್ಲಿ ನಮ್ಮ ಸಂಸ್ಥೆಗೆ ಧನಸಹಾಯ ಮಾಡಬೇಕೆಂದು ತಮ್ಮನ್ನು ಕೋರುತ್ತೇವೆ. ತಮ್ಮಂತಹವರು ನಮ್ಮ ಚಟುವಟಿಕೆಗಳಿಗೆ ಬೆಂಬಲ ನೀಡಿದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರ ಮತ್ತಷ್ಟು ಶ್ರೀಮಂತವಾಗಲು ಸಾಧ್ಯವಾಗಬಹುದಾಗಿರುತ್ತದೆ.

ತಾವು ದತ್ತಿನಿಧಿಗಳನ್ನು ಸ್ಥಾಪಿಸುವ ಮೂಲಕ, ಶಾಶ್ವತ ನಿಧಿಗೆ ಉದಾರವಾಗಿ ಧನಸಹಾಯ ಮಾಡುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳನ್ನು ಖರೀದಿಸುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳ ಪ್ರಾಯೋಜಕತ್ವವನ್ನು ವಹಿಸಿಕೊಳ್ಳುವುದರ ಮೂಲಕ ಹಲವು ವಿಧಗಳಲ್ಲಿ ನಮ್ಮ ಜೊತೆ ಕೈ ಜೋಡಿಸಬಹುದಾಗಿರುತ್ತದೆ.

ಪ್ರತಿಷ್ಠಾನಕ್ಕೆ ನೀಡುವ ನಿಧಿಯ ಮೊಬಲಗಿನ ಮೇಲೆ ಭಾರತ ಸರ್ಕಾರದ ಆದಾಯ ತೆರಿಗೆ ಕಾನೂನಿನ '80 ಜಿ' ಅನ್ವಯ ತೆರಿಗೆ ವಿನಾಯಿತಿ ದೊರೆಯುತ್ತದೆ.

ತಾವು ತಮ್ಮ ಕಾಣಿಕೆಗಳನ್ನು ಚೆಕ್/ಡಿಡಿ ಮೂಲಕ ಪ್ರತಿಷ್ಠಾನದ ಹೆಸರಿನಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು.

ಶಾಶ್ವತ ನಿಧಿಗೆ 2015 ರ ಸೆಪ್ಟೆಂಬರ್ ಹಾಗೂ ಅಕ್ಟೋಬರ್‌ತಿಂಗಳುಗಳಲ್ಲಿ ಕಾಣಿಕೆ ನೀಡಿರುವವರ ಪಟ್ಟಿ:

ಶ್ರೀ ಎ.ಎನ್. ಪ್ರಕಾಶ್, ವೈ ಎಸ್ ವರದರಾಜನ್, ಶ್ರೀಮತಿ ನಾಗಮಣಿ ಎಸ್ ರಾವ್, ಶ್ರೀ ಟಿ. ಆರ್.ಅನಂತರಾಮು, ಡಾ. ಪಿ.ವಿ. ನಾರಾಯಣ, ಶ್ರೀ. ಬಿ.ಎಸ್. ಗುರುಪ್ರಸಾದ್

ಇಲ್ಲಿಯವರೆಗೆ ಸಂಗ್ರಹಿಸಲಾದ ಮೊತ್ತ ರೂ. 15.85 ಲಕ್ಷ

# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

**– ಡಾ.ಪಿ.ವಿ, ನಾರಾಯಣ**

**ಅಮ್ಮ**: ಕನ್ನಡದ ಮಕ್ಕಳೆಲ್ಲ ತಮ್ಮ ಮಾತನ್ನು ಪ್ರಾಯಶಃ ಶುರು ಮಾಡುವುದೇ ಅಮ್ಮ ಎನ್ನುವುದರ ಮೂಲಕ. ಅಮ್ಮ ಎಂದರೆ ತಾಯಿ ಎಂದು ಅರ್ಥ ಎಂಬುದು ಎಲ್ಲರಿಗೂ ತಿಳಿದಿದೆ.ಅಮ್ಮನಷ್ಟು ಹತ್ತಿರವಾದವರು ಜಗತ್ತಿನಲ್ಲಿ ಯಾರಿಗಾದರೂ ಯಾರಿದ್ದಾರು?ಎಷ್ಟು ಕವಿತೆಗಳು, ಹಾಡುಗಳು ಅಮ್ಮನನ್ನು ಕುರಿತು ಹಾಡಿಲ್ಲ, ಹೊಗಳಿಲ್ಲ!ಆದರೆ ಅಮ್ಮ ಎಂಬ ಶಬ್ದಕ್ಕೂ ತಾಯಿ ಎಂಬ ಅರ್ಥಕ್ಕೂ ಇರುವ ಸಂಬಂಧವೇನೂ ಅನನ್ಯವಾದುದೂ ಅಲ್ಲ, ಮೊದಲಿಂದ ಇರುವಂಥದೂ ಅಲ್ಲ. ಕನ್ನಡದ ಆದಿಕವಿ ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿ ಅಮ್ಮ ಎಂಬ ಶಬ್ದ ಬಳಕೆಯಾಗಿರುವುದು ತಂದೆ ಎಂಬರ್ಥದಲ್ಲಿ!ದೌತ್ಯಕ್ಕೆ ಬಂದ ಕೃಷ್ಣ ಕರ್ಣನನ್ನು ಏಕಾಂತದಲ್ಲಿ ಭೇಟಿಯಾಗಿ ಅವನ ಹುಟ್ಟಿನ ರಹಸ್ಯವನ್ನು ತಿಳಿಸಲು ತೊಡಗುವಾಗ ಹೇಳುವ ಮಾತಿದು: "ಒಯ್ಯನೆ ಕೇಳ ಕರ್ಣ, ನಿನ್ನಾದಿಯೊಳ್ ಅಬ್ಬೆ ಕೊಂತಿ, ನನಗಮ್ಮನ್ ಅಹರ್ಪತಿ" ಎಂದರೆ ನನ್ನ ತಾಯಿ ಕುಂತಿ, ತಂದೆ ಸೂರ್ಯ ಎಂದು. ಇದೇ ವಾಕ್ಯದಲ್ಲಿದೆಯಲ್ಲ ತಾಯಿ ಎಂಬುದಕ್ಕೆ ಇದ್ದ ಪದ ಅಬ್ಬೆ, ಇದು ಅವ್ವೆ, ಅವ್ವ ಎಂದೂ ಆಗುತ್ತದೆ. ಚಂದಿಯಮ್ಮ, ಕೊತ್ತಮ್ಮ ಮುಂತಾದ 'ಅಮ್ಮ'ದಿಂದ ಕೊನೆಯಾಗುವ ಗಂಡುಸರ ಹೆಸರುಗಳು ಹಳೆಯ ಶಾಸನಗಳಲ್ಲಿಯೇ ಸಿಕ್ಕುತ್ತವೆ. ಕನ್ನಡದ ಕೆಲವು ಪ್ರಸಿದ್ಧ ಹೆಸರುಗಳನ್ನು ನೋಡಿ: ಅಲ್ಲಮ, ಎಚ್ಚಮ ಇತ್ಯಾದಿ. ಅವುಗಳ ಕೊನೆಯಲ್ಲಿರುವ 'ಅಮ' ಎಂಬುದು 'ಅಮ್ಮ' ಎಂಬುದರ ಸವಕಳಿ ರೂಪ ಎಂದು ಪಂಡಿತರು ಹೇಳುತ್ತಾರೆ.'ಅಮ್ಮ' ಎಂಬ ಶಬ್ದವನ್ನು ತಾಯಿ ಎಂಬರ್ಥದಲ್ಲಿ ಪ್ರಾಯಶಃ ಮೊದಲು ಬಳಕೆಯಾಗಿರುವುದು ಭೀಮಕವಿಯ 'ಬಸವಪುರಾಣ'ದಲ್ಲಿ.ಇವನು ಹದಿನಾಲ್ಕನೆಯ ಶತಮಾನದ ಕವಿ.ಇದಕ್ಕಿಂತ ಮುಂಚೆಯೇ ಯಾವಾಗಲೋ ಆಡುಮಾತಿನಲ್ಲಿ ಅರ್ಥ ಬದಲಾಗಿರಬೇಕು. ಹೀಗೆ ತೀರ ಬದಲಾದ ಅರ್ಥ ಏಕೆ ಆಯಿತು ಎಂಬುದು ನಿಗೂಢವೇ ಸರಿ

ತಾಯಿ ಎಂಬ ಅರ್ಥವಿದ್ದರೂ, ಸ್ತ್ರೀಲಿಂಗ ರೂಪವಾದರೂ, ತಾಯಂದಿರು ಗಂಡು ಮಕ್ಕಳನ್ನು ಲಲ್ಲೈಸುವಾಗಲೋ, ಗೆಳೆಯನನ್ನು ಕುರಿತ ಸಲುಗೆಯ ಸಂಬೋಧನೆಯಲ್ಲೋ ಈಗಲೂ 'ಅಮ್ಮ' ಎಂದು ಕರೆಯುವುದುಂಟಲ್ಲ, ಹಾಗೆಯೇ ಹೆಣ್ಣುಮಕ್ಕಳನ್ನು ಕೆಲವು ಸಂದರ್ಭಗಳಲ್ಲಿ 'ಅಪ್ಪ' ಎಂದು ಸಂಬೋಧಿಸುವುದೂ ಉಂಟು. 'ಅಮ್ಮ' ಎಂಬ ಶಬ್ದವು ಆಶ್ಚರ್ಯ, ಆಯಾಸ, ದುಃಖಸೂಚಕ ಅವ್ಯಯವಾಗಿಯೂ ಬಳಕೆಯಲ್ಲಿದೆ.'ಅಮ್ಮಮ್ಮ' ಎಂಬ ದ್ವಿರುಕ್ತಿಯನ್ನೂ ಬಳಸುವ ರೂಢಿಯಿದೆ.

**ಅರಸ**: ಅರಸ ಅಥವಾ ಅರಸು ರಾಜನ್ ಎಂಬ ಸಂಸ್ಕೃತ ಮೂಲದ್ದೆಂದು ಹೇಳಲಾಗುವ ಶಬ್ದ. ತಮಿಳಿನಲ್ಲಿ ಇದು ಅರಶನ್, ಅರೈಶನ್, ಅರಯನ್ ಎಂದೂ, ಮಲಯಾಳಂನಲ್ಲಿ ಅರಶನ್ ಎಂದೂ, ತೆಲುಗಿನಲ್ಲಿ ಅರಸು ಎಂದೂ ತುಳುವಿನಲ್ಲಿ ಅರಸು, ಅರಸ ಎಂದೂ ಆಗುತ್ತದೆ. "ಅವನಿಪತಿ ರಾಜಂ ಪಾರ್ಥಿವಂ ನೃಪಂ ಕ್ಷತ್ರಿಯಂ ಜನಾಧಿಪಂ ಅರಸಂ" ಎಂದು 'ಅಭಿಧಾನ ವಸ್ತುಕೋಶ' ಹೇಳುತ್ತದೆ.ಆಳುವವನು ಎಂಬರ್ಥದಲ್ಲಿ ಈ ಶಬ್ದವು ಸುಮಾರು ಕ್ರಿಶ. 500 ರ ಶಾಸನವೊಂದರಲ್ಲಿ ಉಕ್ತವಾಗಿದೆ ("ಶ್ರೀ ಚನ್ದಯಮ್ಮರಸರ್")."ಪರದರ್ಗೆ ಆ ಪಾರ್ವರ್ಗ್ಗೆ ಆಯ್ತು ಅರಸರ್ಗೆ" ಎಂಬುದು 'ಕವಿರಾಜಮಾರ್ಗ'ದ ಪ್ರಯೋಗ. "ಅರಸಂ ಭೀತನಾದುದನೇತೆಱದಿಂದಱಿದೆ" ಎಂಬುದು 'ಧರ್ಮಾಮೃತ'ದ ಮಾತು.ಅರಸರ್ ಎಂಬುದು ಇದರ ಬಹುವಚನ ರೂಪ ("ಅರಸರ್ ಬೆಸವೇೞ್ದಿರ್" – 'ಧರ್ಮಾಮೃತ').ಅರಸು ಎಂಬ ರೂಪವೂ ವ್ಯಾಪಕ ಬಳಕೆಯಲ್ಲಿದೆ."ಅರಸುಗಳೆಲ್ಲಂ ಬಾಯ್ಕೇಳ್ದರೆಂದುಂ ಆಶಾಂತರಂಗಳಳ್ಕಿದುವೆಂದುಂ ಕೀರ್ತಿಸೆ" (ಪಂಪನ 'ಆದಿಪುರಾಣ')."ಅರಸುಗಳಿಗಿದು ವೀರ ದ್ವಿಜರಿಗೆ ಪರಮವೇದದ ಸಾರ" ಎಂಬ ಸುಪ್ರಸಿದ್ಧ ಮಾತು ಕುಮಾರವ್ಯಾಸನದು.ವಚನಗಳಲ್ಲಿ ಮಂಡಲಾಧಿಪತಿಯನ್ನು 'ಮಂಡಲದ ಅರಸು' ಎಂದೂ ಕರೆಯಲಾಗಿದೆ.ಅರಸ ಶಬ್ದದ ಸ್ತ್ರೀಲಿಂಗ ರೂಪ ಅರಸಿ ("ಅರಸರೊಳೆ ನೀಂ ಸರಸಮಂ ಅರಸಿಯವೊಲಾಡುತಿರ್ಪೆ" – 'ಕವಿರಾಜಮಾರ್ಗ').ರಾಣಿಯ ಪದವಿ ಎಂಬರ್ಥದಲ್ಲಿ 'ಅರಸಿವಟ್ಟ' ಪ್ರಯೋಗವಿದೆ ("ಲಂಕೆಯನಾಳ್ದು ತಾಳ್ದರಸಿವಟ್ಟಮಂ" – 'ಪಂಪರಾಮಾಯಣ').

ಸಮಾಸಗಳಲ್ಲಿ ಅರಸು ಎಂಬ ಪ್ರಯೋಗವೇ ಕಂಡುಬರುತ್ತದೆ. 'ಅರಸುಕುಮಾರ' ("ಅರಸುಕುಮಾರಂ ಅನಯತರ ಕಡೆಗಣ್ಣಿಂದೆ ನೋಡಿ" – 'ಕವಿರಾಜಮಾರ್ಗ'); 'ಅರಸುಮಗ' ("ಒಡನೆ ನೆರೆದರಸುಮಕ್ಕಳ" – 'ಪಂಪಭಾರತ'); 'ಅರಸುಗುಣ' ("ಅರಸುಗುಣಂ ಪಟಿಯನಣಂ ಬರಲಿತ್ತುದೆ" – 'ಕಾವ್ಯಾವಲೋಕನ'); 'ಅರಸುಗಾದೆ' ("ಅರಸುಗಾದೆಗಳನುಮಂ ನೀನಱಿದು" – 'ಕಬ್ಬಿಗರ ಕಾವ') ಇತ್ಯಾದಿ [ಇಲ್ಲಿನ ಅರಸು ಪ್ರಮುಖ, ಮುಖ್ಯ ಎಂಬರ್ಥ ಸೂಚಿಸುತ್ತಿದೆ].

ಅರಸು ಎಂಬುದು ಅನೇಕ ಕ್ರಿಯಾಸಮಾಸಗಳ ಪೂರ್ವಪದವೂ ಹೌದು: 'ಅರಸುಗೆಯ್' ಅಥವಾ 'ಅರಸುತನಂಗೆಯ್' ಎಂದರೆ ಆಳ್ವಿಕೆ ಮಾಡು ("ದ್ರುಪದಂ ಛತ್ರಾವತಿಯೊಳ್ ಅರಸುಗೆಯ್ದಪನೆಂದು" – 'ಪಂಪಭಾರತ') ("ಅರಸುತನಂಗೆಯ್ವಟಿಪಿಂ" – 'ಪಂಪರಾಮಾಯಣ'); 'ಅರಸುಗಾಣ್' ಎಂದರೆ ರಾಜಪದವಿಯನ್ನು ಪಡೆ ("ಕುಱುಂಬಂ ಅರಸುಗಂಡಂತೆ"– 'ಧರ್ಮಾಮೃತ') ಇತ್ಯಾದಿ.

## ಮಾತಿನ ಮಂಟಪ

ಬಿ.ಎಂ.ಶ್ರೀ ಪ್ರತಿಷ್ಠಾನದ ಸದಸ್ಯರಾದ ಶ್ರೀ. ಎಂ.ಎಸ್. ಭಾಸ್ಕರ್ ಸಂಪಾದಿಸಿರುವ 'ಮಾತಿನಮಂಟಪ' ಪುಸ್ತಕ ಈಚೆಗೆ ಬೆಂಗಳೂರಿನ ಸ್ಂದ್ರ್ಪ್ರಕಾಶ್ನ್ದಿಂದ್ ಲೋಕಾರ್ಪಣೆಯಗಿದೆ.

Date of Posting : 30-11-2015
HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2015-2017
Office of Posting: Bangalore PSO, Bangalore 560026
Price :Annual Subscription Rs. 20/-

### 2015 ನವೆಂಬರ್ ತಿಂಗಳಿನಲ್ಲಿ(20ರ ವರೆಗೆ) ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗವು ಸತತವಾಗಿ ಕಾರ್ಯನಿರತವಾಗಿರುತ್ತದೆ. ನಮ್ಮಲ್ಲಿರುವ ಅಪಾರ ಸಂಖ್ಯೆಯ ಹಸ್ತಪ್ರತಿಗಳಿಗೆ ಸಂಬಂಧಿಸಿದಂತೆ ಹಲವಾರು ಚಟುವಟಿಕೆಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ. 2015ರ ನವೆಂಬರ್ ತಿಂಗಳಿನಲ್ಲಿ 12 ಗ್ರಂಥಗಳ ಶುಷ್ಕ ಶುದ್ದೀಕರಣ, 11 ಗ್ರಂಥಗಳಿಗೆ ತೈಲ ಲೇಪನ ಮತ್ತು ಮಸಿ ಲೇಪನ, 15 ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಮತ್ತು ಸ್ಕಾನ್ ಮಾಡಲು ಸಿದ್ಧಪಡಿಸಿರುವುದು, 11 ಗ್ರಂಥಗಳಿಗೆ ಸೂಚಿಗಳನ್ನು ತಯಾರಿಸಿರುವುದು.9 ಗ್ರಂಥಗಳಿಗೆ ಅಟ್ಟೆ ಕಟ್ಟಿರುವುದು.ಈ ಎಲ್ಲಾ ಕೆಲಸಗಳನ್ನು ಮಾಡಿದೆ.ದಾನವಾಗಿ ಸ್ವೀಕರಿಸಿದ ತಿಗಳಾರಿ ಲಿಪಿಯ ನಾಲ್ಕು ಗ್ರಂಥಗಳಲ್ಲಿ ಪತ್ರಗಳನ್ನು ಪುನರ್ ಜೋಡಣೆ ಮಾಡಿ ಮಸಿ ಲೇಪನಕ್ಕೆ ಸಿದ್ಧಗೊಳಿಸಲಾಗಿದೆ.

## ಕೋರಿಕೆ

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ – ಆಗಿದ್ದು ಐದು ವರ್ಷಗಳ ಚಂದಾ ಹಣ ರೂ. 100/– ಮಾತ್ರ.

ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath



ಅಚ್ಚಾದ ಪುಸ್ತಕ

ತೆರೆದ-ಅಂಚೆ

ಶ್ರೀ: 13. ಶ್ರೀ ಕೃಷ್ಣ
ನೃಪತುಂಗ ಯುವಕರ ಕನ್ನಡ ಸಂಘ,
ನಾಯಂಡಹಳ್ಳಿ,
ಮೈಸೂರು ರಸ್ತೆ
ಬೆಂಗಳೂರು- 560039

ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭